## ॥ ಕಂಡೆ ನಾ ಗೋವಿಂದನ ॥

ಕಂಡೆ ನಾ ಗೋವಿಂದನ ।
ಪುಂಡರೀಕಾಕ್ಷ ಪಾಂಡವ ಪಕ್ಷ ಕೃಷ್ಣನ ॥ ಪ ॥

ಕೇಶವ ನಾರಾಯಣ ಶ್ರೀಕೃಷ್ಣನ ।
ವಾಸುದೇವ ಅಚ್ಯುತಾನಂತನ ॥
ಸಾಸಿರ ನಾಮದ ಶ್ರೀ ಹೃಷೀಕೇಶನ ।
ಶೇಷಶಯನ ನಮ್ಮ ವಾಸುದೇವ ಸುತನ ॥ ೧ ॥

ಮಾಧವ ಮಧುಸೂದನ ತ್ರಿವಿಕ್ರಮನ ।
ಯಾದವಕುಲವಂದ್ಯನ ॥
ವೇದಾಂತ ವೇದ್ಯನ ಇಂದಿರಾರಮಣನ ।
ಆದಿ ಮೂರುತಿ ಪ್ರಹ್ಲಾದವರದನ ॥ ೨ ॥

ಪುರುಷೋತ್ತಮ ನರಹರಿ ಶ್ರೀ ಕೃಷ್ಣನ ।
ಶರಣಾಗತ ರಕ್ಷಕನ ॥
ಕರುಣಾಕರ ನಮ್ಮ ಪುರಂದರವಿಠಲನ ।
ನೆರೆ ನಂಬಿದೆನು ಬೇಲೂರ ಚೆನ್ನಿಗನ ॥ ೩ ॥